[redacted]

# ಕರ್ನಾಟಕ ವಿಧಾನಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 365

ಸದಸ್ಯರ ಹೆಸರು : ಶ್ರೀ ಅರವಿಂದ ಕುಮಾರ್ ಅರಳಿ (ವಿಧಾನಸಭೆಯಿಂದ ಚುನಾಯಿತರಾದವರು)

ಉತ್ತರಿಸುವ ದಿನಾಂಕ : 18-07-2019.

ಉತ್ತರಿಸುವ ಸಚಿವರು : ಮಾನ್ಯ ಮುಖ್ಯಮಂತ್ರಿಯವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ನೆರೆಯ ರಾಜ್ಯವಾದ ತೆಲಂಗಾಣದ ರಂಗಾರೆಡ್ಡಿ ಜಿಲ್ಲೆಯಲ್ಲಿ ಖಾಸಗಿ ಶಾಲೆಗಳಲ್ಲಿ ಪತ್ರಕರ್ತರ ಮಕ್ಕಳಿಗೆ ಶೇ.50 ರಷ್ಟು ಶುಲ್ಕ ವಿನಾಯಿತಿ ನೀಡುವಂತೆ ಆದೇಶವಾದಂತೆ ನಮ್ಮ ರಾಜ್ಯದಲ್ಲಿಯೂ ಮಾನ್ಯತೆ ಪಡೆದ ಪತ್ರಕರ್ತರಿಗೆ ಇಂತಹ ಸೌಲಭ್ಯ ಒದಗಿಸುವ ಪ್ರಸ್ತಾವನೆಯು ಸರ್ಕಾರದ ಮುಂದಿದೆಯೇ; ಇದ್ದಲ್ಲಿ, ಯಾವಾಗ ಒದಗಿಸಲಾಗುವುದು, ಇಲ್ಲದಿದ್ದಲ್ಲಿ, ಅದಕ್ಕೆ ಕಾರಣಗಳೇನು; | ಇಂತಹ ಯಾವುದೇ ಪ್ರಸ್ತಾವನೆಯು ಸರ್ಕಾರದ ಮುಂದೆ ಇರುವುದಿಲ್ಲ. |
| (ಆ) | ಬೇರೆ-ಬೇರೆ ರಾಜ್ಯಗಳ ಪತ್ರಿಕೆಗಳಾದ ಉರ್ದು, ತೆಲುಗು, ಮರಾಠಿ ಪತ್ರಿಕೆಗಳನ್ನು ಓದುವ ಜನರು ಕರ್ನಾಟಕ ರಾಜ್ಯದಲ್ಲಿದ್ದು, ಇಂತಹ ಪತ್ರಿಕೆಗಳಿಗೆ ರಾಜ್ಯದ ಯೋಜನೆಗಳ ಬಗ್ಗೆ ಜಾಹೀರಾತು ಹೊರಡಿಸಲು ಅವಕಾಶ ನೀಡದಿರಲು ಕಾರಣವೇನು ; ಅವಕಾಶ ನೀಡುವುದಾದರೆ ಯಾವ ಕಾಲಮಿತಿಯೊಳಗೆ ನೀಡಲಾಗುವುದು ; | ಕರ್ನಾಟಕ ರಾಜ್ಯದಲ್ಲಿ ಮುದ್ರಣಗೊಂಡು ನಿಗದಿತ ಪ್ರಸಾರ ಸಂಖ್ಯೆ ಹೊಂದಿರುವ ಉರ್ದು, ಮರಾಠಿ, ತೆಲುಗು ಪತ್ರಿಕೆಗಳನ್ನು ಜಾಹೀರಾತು ನೀತಿ 2013 ರ ಅನುಷ್ಠಾನ ನಿಯಮಗಳು -2014 ರನ್ವಯ ಮಾಧ್ಯಮ ಪಟ್ಟಿಗೆ ಸೇರ್ಪಡೆ ಮಾಡಿಕೊಳ್ಳಲಾಗಿದೆ. ಇಲಾಖೆಯ ಮಾಧ್ಯಮ ಪಟ್ಟಿಯಲ್ಲಿರುವ ಉರ್ದು, ಮರಾಠಿ, ತೆಲುಗು ಪತ್ರಿಕೆಗಳಿಗೆ ಅಗತ್ಯ ಸಂದರ್ಭಗಳಲ್ಲಿ ಸರ್ಕಾರದ ಸಾಧನೆಗಳ ಕುರಿತ ಆಕರ್ಷಕ ಜಾಹೀರಾತುಗಳನ್ನು ಮತ್ತು ಸರ್ಕಾರದ ವಿವಿಧ ಅಭಿವೃದ್ಧಿ ಕಾಮಗಾರಿಗಳ ಟೆಂಡರ್ ಜಾಹೀರಾತುಗಳನ್ನು ಇಲಾಖೆಯಿಂದ ಬಿಡುಗಡೆ ಮಾಡಲಾಗುತ್ತಿದೆ. |
| (ಇ) | ಕರ್ನಾಟಕದಲ್ಲಿ ಕನ್ನಡ, ಉರ್ದು, ಮರಾಠಿ, ತೆಲುಗು ಪತ್ರಿಕೆಗಳ ಪ್ರಸಾರವಿದ್ದು, ಈ ಪತ್ರಿಕೆಗಳ ವರದಿಗಾರರಿಗೆ ನಿವೇಶನ ಸೌಲಭ್ಯಗಳನ್ನು ಕಲ್ಪಿಸುವ ವಿಚಾರ ಸರ್ಕಾರದ ಮುಂದಿದೆಯೇ; ಈ ಬಗ್ಗೆ ಸರ್ಕಾರದ ನಿಲುವೇನು ; | ಕರ್ನಾಟಕದಲ್ಲಿ ಕನ್ನಡ, ಉರ್ದು, ಮರಾಠಿ, ತೆಲುಗು ಪತ್ರಿಕೆಗಳ ವರದಿಗಾರರಿಗೆ ನಿವೇಶನ ಸೌಲಭ್ಯ ಕಲ್ಪಿಸುವ ಪ್ರಸ್ತಾವನೆ ಸರ್ಕಾರದ ಮುಂದೆ ಇರುವುದಿಲ್ಲ. |

2..

| | | |
|---|---|---|
| | ಕರ್ನಾಟಕದಲ್ಲಿ ಪ್ರಸಾರವಾಗುತ್ತಿರುವ ಕನ್ನಡ, ಉರ್ದು, ಮರಾಠಿ, ತೆಲುಗು, ಇಂಗ್ಲೀಷ್ ಪತ್ರಿಕೆಗಳ ಎಷ್ಟು ವರದಿಗಾರರಿಗೆ ಮಾನ್ಯತೆ ನೀಡಲಾಗಿದೆ ? (ವಿವರವಾದ ಮಾಹಿತಿ ನೀಡುವುದು). | ಕರ್ನಾಟಕದಲ್ಲಿ ಪ್ರಸಾರವಾಗುತ್ತಿರುವ ಈ ಕೆಳಕಂಡ ಭಾಷಾ ಪತ್ರಿಕೆಗಳ ವರದಿಗಾರರಿಗೆ ಮಾನ್ಯತೆ ನೀಡಲಾಗಿದೆ.<br><br>1) ಕನ್ನಡ – 761<br>2) ಇಂಗ್ಲೀಷ್ – 138<br>3) ಮರಾಠಿ – 10<br>4) ಉರ್ದು – 16<br>5) ತೆಲುಗು – 4 |

KCI-PIP/22/2019-INFO-KC-SEC

(ಹೆಚ್.ಡಿ.ಕುಮಾರಸ್ವಾಮಿ)
(ಮುಖ್ಯಮಂತ್ರಿ)